## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಮರಿತಿಬ್ಬೇಗೌಡ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1235

ಉತ್ತರಿಸಬೇಕಾದ ದಿನಾಂಕ : 17.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಇತ್ತೀಚಿನ ಕೃಷಿ ಸಾಲ ಮನ್ನಾ ಯೋಜನೆಯಲ್ಲಿ ಪ್ರಾಥಮಿಕ ಸಹಕಾರ ಕೃಷಿ ಹಾಗೂ ಗ್ರಾಮೀಣಭಿವೃದ್ಧಿ ಬ್ಯಾಂಕ್‌ಗಳು ನೀಡಿದ ಕೃಷಿ ಆಧಾರಿತ ಸಾಲಗಳನ್ನು ಮನ್ನಾ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯ ಸರ್ಕಾರವು ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲವನ್ನು ಮನ್ನಾ ಮಾಡಿರುವುದಿಲ್ಲ. ಆದರೆ ದಿನಾಂಕ 14.02.2020 ರ ಸರ್ಕಾರದ ಆದೇಶದಂತೆ ಸುಸ್ತಿಯಾಗಿರುವಂತಹ ಮಧ್ಯಮಾವದಿ ಮತ್ತು ದೀರ್ಘಾವಧಿ ಸಾಲದ ಅಸಲನ್ನು 75904 ರೈತರಿಂದ ರೂ.33602.56 ಲಕ್ಷಗಳನ್ನು ಮರುಪಾವತಿಸಿದಲ್ಲಿ ರೂ.36612.09 ಲಕ್ಷಗಳನ್ನು ಬಡ್ಡಿ ಮನ್ನಾ ಮಾಡಲು ಸರ್ಕಾರ ಆದೇಶ ಹೊರಡಿಸಿದೆ. ಈ ಬಡ್ಡಿ ಮನ್ನಾ ಯೋಜನೆಯಲ್ಲಿ ಕೃಷಿ ಮತ್ತು ಕೃಷಿ ಪೂರಕ ಯೋಜನೆಯಡಿಯಲ್ಲಿನ ಕೆಲವೊಂದು ಯೋಜನೆಗಳನ್ನು ಕೈಬಿಟ್ಟಿದ್ದರಿಂದಾಗಿ ದಿನಾಂಕ:04.03.2020 ರ ಪತ್ರದಲ್ಲಿ ನಬಾರ್ಡ್ ಗುರುತಿಸಿದ ಕೃಷಿ ಮತ್ತು ಕೃಷಿ ಪೂರಕ ಸಾಲಗಳಲ್ಲಿ ಕೃಷಿ ಯಾಂತ್ರೀಕರಣ, ಪ್ಲಾಂಟೇಷನ್ ಮತ್ತು ತೋಟಗಾರಿಕೆ ಅಭಿವೃದ್ಧಿ ಉದ್ದೇಶಗಳನ್ನು ಸಹಾ ಬಡ್ಡಿ ಮನ್ನಾ ಯೋಜನೆಯಲ್ಲಿ ಸೇರ್ಪಡೆ ಮಾಡಲಾಗಿದೆ. |
| ಆ | ಸದರಿ ಬ್ಯಾಂಕುಗಳಲ್ಲಿ ವಿವಿಧ ಯೋಜನೆಯಡಿಯಲ್ಲಿ ಸಾಲ ಪಡೆದು ಸುಸ್ತಿಯಾಗಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; | ಪಿಕಾರ್ಡ್ ಬ್ಯಾಂಕುಗಳಿಂದ ವಿವಿಧ ಯೋಜನೆಯಡಿಯಲ್ಲಿ ಸಾಲ ಪಡೆದು ಸುಸ್ತಿಯಾಗಿರುವ ರೈತರ ಸಂಖ್ಯೆ 75904 |
| ಇ | ಸದರಿ ಫಲಾನುಭವಿಗಳು ವಿವಿಧ ಯೋಜನೆಯಡಿಯಲ್ಲಿ ಪಡೆದಿರುವ ಸಾಲದ ಅಸಲು ಹಾಗೂ ಬಡ್ಡಿಯ ಮೊತ್ತವೆಷ್ಟು; (ಯೋಜನಾವಾರು ವಿವರ ನೀಡುವುದು). | ದಿನಾಂಕ 31.01.2020 ಕ್ಕೆ ಸುಸ್ತಿಯಾಗಿರುವ ರೈತರು ವಿವಿಧ ಯೋಜನೆಯಡಿಯಲ್ಲಿ ಪಡೆದಿರುವ ಸಾಲದ ಸುಸ್ತಿ ಅಸಲು ಹಾಗೂ ಬಡ್ಡಿ ವಿವರ (ಯೋಜನಾವಾರು) (ರೂ.ಲಕ್ಷಗಳಲ್ಲಿ) |

| ಕ್ರಸಂ. | ಯೋಜನೆಗಳು | ಸಂಖ್ಯೆ | ಅಸಲು | ಬಡ್ಡಿ | ಒಟ್ಟು |
|---|---|---|---|---|---|
| 1 | ಸಣ್ಣ ನೀರಾವರಿ | 15310 | 3769.87 | 4838.99 | 8608.86 |
| 2 | ತೋಟಗಾರಿಕೆ | 10823 | 5168.83 | 6050.34 | 11219.17 |
| 3 | ರೇಷ್ಮೆ | 3905 | 1884.83 | 2082.30 | 3967.13 |
| 4 | ವಿವಿದೋದ್ದೇಶ | 21559 | 10436.55 | 7828.65 | 18265.20 |
| 5 | ಕೃಷಿಯಾಂತ್ರೀಕರಣ | 5883 | 7096.95 | 5314.98 | 12411.93 |
| 6 | ಭೂ ಅಭಿವೃದ್ಧಿ | 16036 | 4553.31 | 4693.89 | 9247.20 |
| 7 | ಸಾಮಾನ್ಯ | 2388 | 692.22 | 5802.94 | 6495.16 |
| | **ಒಟ್ಟು** | **75904** | **33602.56** | **36612.09** | **70214.65** |

| | | |
|---|---|---|
| ಈ | ಸದರಿ ಸಹಕಾರಿ ಬ್ಯಾಂಕುಗಳಿಂದ ಪಡೆದಿರುವ ರೈತರ ಅಸಲು ಮತ್ತು ಬಡ್ಡಿಯನ್ನು ಮನ್ನಾ ಮಾಡಲು ಸರ್ಕಾರ ಚಿಂತಿಸುವುದೇ; | ರಾಜ್ಯದ ರೈತರು ಸಹಕಾರ ಸಂಸ್ಥೆಗಳ ಮೂಲಕ ಸಾಲ ಪಡೆದು ದಿನಾಂಕ 31.01.2020 ಕ್ಕೆ ಸುಸ್ತಿಯಾಗಿರುವ ಕೃಷಿ ಮತ್ತು ಕೃಷಿ ಪೂರಕ ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳ ಅಸಲನ್ನು ದಿನಾಂಕ 31.03.2020 ರೊಳಗೆ ರೈತರು ಮರುಪಾವತಿಸಿದಲ್ಲಿ ಸುಸ್ತಿಯಾಗಿರುವ ಸಾಲಗಳ ಮೇಲಿನ ಬಡ್ಡಿಯನ್ನು ಸಂಪೂರ್ಣ ಮನ್ನಾ ಮಾಡಲು ಆದೇಶ ಸಂಖ್ಯೆ: ಸಿಒ 27 ಸಿಎಲ್‌ಎಸ್ 2020, ಬೆಂಗಳೂರು ದಿನಾಂಕ:14.02.2020 ರಂದು ಹೊರಡಿಸಲಾಗಿರುತ್ತದೆ. ದಿನಾಂಕ 31.03.2020 ರವರೆಗೆ ಅಸಲು ಮರುಪಾವತಿಸಲು ಅವಕಾಶ ಮಾಡಿಕೊಟ್ಟಿದೆ. ಅಸಲು ಮನ್ನಾ ಮಾಡುವ ಯೋಜನೆ ಜಾರಿಯಲ್ಲಿರುವುದಿಲ್ಲ. |
| ಉ | ಹಾಗಾದರೆ, ಯಾವ ಕಾಲಮಿತಿಯಲ್ಲಿ ಯಾವ ಮಾನದಂಡ ಅನುಸರಿಸಿ ಅಸಲು ಮತ್ತು ಬಡ್ಡಿಯನ್ನು ಮನ್ನಾ ಮಾಡಲಾಗುವುದು ? | ರಾಜ್ಯದ ರೈತರು ಸಹಕಾರ ಸಂಸ್ಥೆಗಳ ಮೂಲಕ ಸಾಲ ಪಡೆದು ದಿನಾಂಕ 31.01.2020 ಕ್ಕೆ ಸುಸ್ತಿಯಾಗಿರುವ ಕೃಷಿ ಮತ್ತು ಕೃಷಿ ಪೂರಕ ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲಗಳ ಅಸಲನ್ನು ದಿನಾಂಕ 31.03.2020 ರೊಳಗೆ ರೈತರು ಸಂಬಂಧಿಸಿದ ಸಂಸ್ಥೆಗಳಿಗೆ ಮರುಪಾವತಿಸಿದಲ್ಲಿ, ಈ ಸಾಲಗಳ ಮೇಲಿನ ಬಡ್ಡಿಯನ್ನು ಸರ್ಕಾರದಿಂದ ಭರಿಸಲಾಗುವುದೆಂದು ತೀರ್ಮಾನಿಸಿ ಆದೇಶ ಹೊರಡಿಸಿದೆ. ಅಸಲು ಮನ್ನಾ ಮಾಡುವ ಯೋಜನೆ ಜಾರಿಯಲ್ಲಿರುವುದಿಲ್ಲ. ಆದರೆ ಅಸಲು ಮರುಪಾವತಿಸಿದರೆ ಬಡ್ಡಿ ಮನ್ನಾ ಮಾಡುವ ಪ್ರಸ್ತಾವನೆಯನ್ನು ಜಾರಿ ಮಾಡಲಾಗಿದೆ. |

**ಸಂಖ್ಯೆ: ಸಿಒ 129 ಸಿಎಲ್‌ಎಸ್ 2020**

**(ಎಸ್.ಟಿ ಸೋಮಶೇಖರ್)**
ಸಹಕಾರ ಸಚಿವರು